# ಕರ್ನಾಟಕ ವಿಧಾನ ಪರಿಷತ್ತು

1 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 79
2 ಸದಸ್ಯರ ಹೆಸರು : ಶ್ರೀ ಕೆ. ಅಬ್ದುಲ್ ಜಬ್ಬಾರ್
3 ಉತ್ತರಿಸುವ ದಿನಾಂಕ : 21-12-2018
4 ಉತ್ತರಿಸುವವರು : ಉಪ ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಕಳೆದ ಏಳೆಂಟು ವರ್ಷಗಳಿಂದ ಅವಾಸ್ತವ ಬಜೆಟ್ ಮಂಡನೆ ಮಾಡಿರುವುದು ನಿಜವೇ; ಇದಕ್ಕೆ ಕಾರಣವೇನು; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಕಳೆದ ಏಳೆಂಟು ವರ್ಷಗಳಲ್ಲಿ ಮಂಡಿಸಿದ ಆಯವ್ಯಯದಲ್ಲಿ ನಿರೀಕ್ಷಿತ ಆದಾಯ ಮತ್ತು ಅನುದಾನಗಳು ಬಾರದೆ ಇದ್ದ ಕಾರಣ, ವಾಸ್ತವಿಕ ಆದಾಯಕ್ಕೂ ಹಾಗೂ ಆಯವ್ಯಯದಲ್ಲಿ ನಿರೀಕ್ಷಿಸಿದ ಆದಾಯಕ್ಕೂ ವ್ಯತ್ಯಾಸವಿದ್ದು, ಕಳೆದ 3 ವರ್ಷಗಳಿಂದ ಈ ಅಂತರವನ್ನು ಕಡಿತಗೊಳಿಸಲು ಪ್ರಯತ್ನಿಸಲಾಗಿದ್ದು, ವಾಸ್ತವಿಕ ಆದಾಯಕ್ಕೆ ಅನುಗುಣವಾಗಿ ಆಯವ್ಯಯ ಮಂಡಿಸಲು ಕ್ರಮಕೈಗೊಳ್ಳಲಾಗುತ್ತಿದೆ. |
| ಆ) | ಕಳೆದ 5 ವರ್ಷದ ಅನುಮೋದಿತ ಮತ್ತು ವಾಸ್ತವ ಆದಾಯ ಎಷ್ಟು (ವಿವರ ನೀಡುವುದು) | ಕಳೆದ 5 ವರ್ಷದ ಅನುಮೋದಿತ ಮತ್ತು ವಾಸ್ತವ ಆದಾಯದ ವಿವರ ಈ ಕೆಳಕಂಡಂತಿದೆ : (ರೂ.ಕೋಟಿಗಳಲ್ಲಿ) |

| Sl. No. | Year | Receipts | | % |
|---|---|---|---|---|
| | | Budget Estimate | Actual | |
| 1 | 2013–14 | 8521 | 3093 | 36% |
| 2 | 2014–15 | 6026 | 4205 | 70% |
| 3 | 2015–16 | 5411 | 5246 | 97% |
| 4 | 2016–17 | 9356 | 6572 | 70% |
| 5 | 2017–18 | 9999 | 7316 | 73% |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಇ) | ರಾಜ್ಯದ ಸ್ಥಳೀಯ ಸಂಸ್ಥೆಗಳಲ್ಲಿ ವಾಸ್ತವಿಕ ಹಾಗೂ ಪಾರದರ್ಶಕವಾದ ವಿತ್ತೀಯ ಹೊಣೆಗಾರಿಕೆ ನಿರ್ವಹಿಸಲು ಜಾರಿಗೊಳಿಸಲಾಗಿರುವ ಕರ್ನಾಟಕ ಸ್ಥಳೀಯ ನಿಧಿ ಪ್ರಾಧಿಕಾರಗಳ ಆರ್ಥಿಕ ಹೊಣೆಗಾರಿಕೆ ಅಧಿನಿಯಮ–2003ರ ವ್ಯಾಪ್ತಿಯಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ತರಲು ಸರ್ಕಾರ ಚಿಂತಿಸಿದೆಯೇ; ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಅನುಷ್ಠಾನ ಮಾಡಲಾಗುವುದು; | ಸರ್ಕಾರದ ಆಯವ್ಯಯ ತಯಾರಿಕೆಯಲ್ಲಿ ಪಾಲಿಸುತ್ತಿರುವ ಶಿಸ್ತಿನಂತೆ ಪಾಲಿಕೆಯಲ್ಲಿಯೂ ಸಹಾ ಪಾಲಿಕೆಯ ವಾಸ್ತವಿಕ ಸ್ವೀಕೃತಿಗೆ ಅನುಗುಣವಾಗಿ ವೆಚ್ಚಗಳಿಗೆ ಅವಕಾಶ ಕಲ್ಪಿಸಿಕೊಳ್ಳುವಂತೆ ಮಾಡುವುದು ಅವಶ್ಯಕವಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸ್ಥಳೀಯ ನಿಧಿ ಪ್ರಾಧಿಕಾರಗಳ ಆರ್ಥಿಕ ಹೊಣೆಗಾರಿಕೆ ಅಧಿನಿಯಮ – 2003 ಅನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಅನ್ವಯಿಸುವಂತೆ ಜಾರಿಗೆ ತರಲು ಕೋರಿ ಬಿಬಿಎಂಪಿ ಆಯುಕ್ತರು, ಸರ್ಕಾರಕ್ಕೆ ಸಲ್ಲಿಸಿದ್ದು, ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. |
| ಈ) | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಆದಾಯಕ್ಕಿಂತ ದುಪ್ಪಟ್ಟು ಬಜೆಟ್ ಮಂಡಿಸಿರುವುದರಿಂದ ಪಾಲಿಕೆ ಕೈಗೊಂಡ ಯೋಜನೆ ಕಾಮಗಾರಿಗಳಿಗೆ ಅನುದಾನ ನೀಡಲಾಗಿದೆ; ಪ್ರಸ್ತುತ ಗುತ್ತಿಗೆದಾರರಿಗೆ ಬಾಕಿ ಉಳಿಸಿಕೊಂಡಿರುವ ಮೊತ್ತ ಎಷ್ಟು; (ವಿವರ ನೀಡುವುದು) | ಪ್ರಸ್ತುತ ಪಾಲಿಕೆಯ ಅನುದಾನದಲ್ಲಿ ಕಾಮಗಾರಿ ನಿರ್ವಹಿಸಿದ ಗುತ್ತಿಗೆದಾರರಿಗೆ ಸುಮಾರು ರೂ. 1890.00 ಕೋಟಿಗಳಷ್ಟು ಮೊತ್ತವನ್ನು ಬಾಕಿ ಉಳಿಸಿಕೊಂಡಿರುತ್ತದೆ. |

...2..

| | | |
|---|---|---|
| ಉ) | ತ್ಯಾಜ್ಯ ನಿರ್ವಹಣೆ ವೇತನ ಮತ್ತು ಪಿಂಚಣಿ ಆಡಳಿತಾತ್ಮಕ ವೆಚ್ಚಗಳು ಪಾಲಿಕೆ ಆಸ್ತಿ ಮತ್ತು ಸ್ವತ್ತುಗಳ ನಿರ್ವಹಣೆ ಆರೋಗ್ಯ, ಶಿಕ್ಷಣ ಹಾಗೂ ಕಲ್ಯಾಣ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ವಿವಿಧ ಹಣಕಾಸು ಸಂಸ್ಥೆಗಳಿಂದ ಪಡೆದ ಮೊತ್ತವೆಷ್ಟು? | ಈ ಬಗ್ಗೆ ವಿವಿಧ ಹಣಕಾಸು ಸಂಸ್ಥೆಗಳಿಂದ ಯಾವುದೇ ಮೊತ್ತವನ್ನು ಪಡೆದಿರುವುದಿಲ್ಲ. |

**ಸಂಖ್ಯೆ: ನಅಇ 658 ಎಂಎನ್‌ಯು 2018**

**(ಜಿ. ಪರಮೇಶ್ವರ)**
ಉಪ ಮುಖ್ಯಮಂತ್ರಿಗಳು